ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 13 ನೇ ಮಾರ್ಚ್, 2020

ಚಾಮರಾಜನಗರ ಜಿಲ್ಲೆಯಲ್ಲಿ ಶುದ್ಧ ಕುಡಿಯುವ ನೀರಿನ ಘಟಕಗಳ ಕುರಿತು

ಶ್ರೀ ಎಸ್. ನಾಗರಾಜ್(ಸಂದೇಶ್ನಾಗರಾಜ್)(ಸ್ಥಳೀಯಸಂಸ್ಥೆಗಳಕ್ಷೇತ್ರ):-

927 (1082) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಚಾಮರಾಜನಗರ ಜಿಲ್ಲೆಯ ಗ್ರಾಮೀಣ ಪ್ರದೇಶಗಳಿಗೆ ಮಂಜೂರಾಗಿರುವ ಶುದ್ಧ ಕುಡಿಯುವ ನೀರಿನ ಘಟಕಗಳ ಸಂಖ್ಯೆ ಎಷ್ಟು; ಅವುಗಳಲ್ಲಿ ಎಷ್ಟು ಘಟಕಗಳು ಕಾರ್ಯಾರಂಭ ಮಾಡಿವೆ; ಎಷ್ಟು ಘಟಕಗಳು ಸ್ಥಾಪನೆಯ ಹಂತದಲ್ಲಿವೆ; ಇನ್ನೂ ಎಷ್ಟು ಘಟಕಗಳನ್ನು ಸ್ಥಾಪಿಸಬೇಕಾಗಿದೆ; ಯಾವ ಯಾವ ಏಜೆನ್ಸಿಗೆ ಈ ಘಟಕಗಳ ಸ್ಥಾಪನೆ ಉಸ್ತುವಾರಿಯ ಹೊಣೆ ನೀಡಲಾಗಿದೆ; (ತಾಲ್ಲೂಕುವಾರು ವಿವರ ಒದಗಿಸುವುದು)

(ಆ) ಚಾಮರಾಜನಗರ ಜಿಲ್ಲೆಯ ತಾಲ್ಲೂಕುಗಳಲ್ಲಿ ಎಷ್ಟು ಶುದ್ಧ ಕುಡಿಯುವ ನೀರಿನ ಘಟಕಗಳು ಕೆಟ್ಟು ಹೋಗಿವೆ; ತಾಲ್ಲೂಕುವಾರು ವಿವರ ಒದಗಿಸುವುದು; ಕೆಟ್ಟು ಹೋಗಿರುವ ಘಟಕಗಳ ದುರಸ್ಥಿಗೆ ಕೂಡಲೇ ಕ್ರಮ ಜರುಗಿಸಲಾಗುವುದೇ;

(ಇ) ಬೇಸಿಗೆ ಕಾಲ ಪ್ರಾರಂಭವಾಗಲಿದ್ದು, ಗ್ರಾಮೀಣ ಪ್ರದೇಶದಲ್ಲಿ ಕುಡಿಯುವ ನೀರಿನ ಬೇಡಿಕೆ ಜಾಸ್ತಿ ಆಗುವ ಸಂಭವ ಇರುವುದರಿಂದ ಎಲ್ಲ ಘಟಕಗಳೂ ಕಾರ್ಯಶೀಲವಾಗಿರುವಂತೆ ನೋಡಿಕೊಂಡು ಜನರಿಗೆ ಸ್ವಚ್ಛ ಕುಡಿಯುವ ನೀರು ದೊರೆಯುವಂತೆ ಸರ್ಕಾರ ಕ್ರಮ ವಹಿಸುವುದೇ?